CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ನವೆಂಬರ್ ೧೭, ೨೦೦೫ (ಕಾರ್ತಿಕ ೨೬, ಶಕ ವರ್ಷ ೧೯೨೭) | ಸಂಚಿಕೆ ೪೫

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ**

**ಹಾಜರಿ :** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ :** ಎಂ.ವೈ.ಎಸ್. -5882 ಲಾರಿ, ಇದರ ನೊಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ಮಾಲಿಕರು ಶ್ರೀ ಇ.ಇ.(ಇ.ಎಲ್.ಇ.) ಕೆ.ಇ.ಬಿ. ಇವರ ಅರ್ಜಿ.
2. ಅಧ್ಯರ್ಪಣ ಸಂಖ್ಯೆ: 491: 91-92, ದಿನಾಂಕ: 29.02.2002.

ವಾಹನ ಸಂಖ್ಯೆ: ಎಂವೈಎಸ್-5882 ಲಾರಿ ಮಜಲು ವಾಹನದ ನೊಂದಾಯಿತ ಮಾಲಿಕರಾದ ಶ್ರೀ ಇ.ಇ. ಕೆ.ಇ.ಬಿ. ರವರು ಈ ವಾಹನದ ತೆರಿಗೆಯನ್ನು ದಿನಾಂಕ: 30.04.1992 ರವರೆಗೆ ಈ ಕಛೇರಿಯಲ್ಲಿ ಪಾವತಿಸಿದ್ದು, ಮುಂದಿನ ಅವಧಿಯ ತೆರಿಗೆಯಿಂದ ವಿನಾಯಿತಿಗಾಗಿ ಸದರಿ ವಾಹನದ ಅನುಪಯೋಗದ ಮಾಹಿತಿಯೊಂದಿಗೆ ವಾಹನದ ಎಲ್ಲಾ ದಾಖಲೆಗಳೊಂದಿಗೆ ಎಸ್‌ಆರ್ ಸಂಖ್ಯೆ: 49:91-92 ರಲ್ಲಿ ದಿನಾಂಕ: 29.02.1992 ರಿಂದ ಅಧ್ಯರ್ಪಣ ಮಾಡಿರುತ್ತಾರೆ. ಸದರಿಯವರು ಕಛೇರಿಗೆ ದಿನಾಂಕ:12.05.1997ರಂದು ಅರ್ಜಿ ಸಲ್ಲಿಸಿ ಈ ವಾಹನವು ಹಳೆಯದಾಗಿದ್ದು, ದುರಸ್ಥಿ ಕಾರ್ಯ ದುಭಾರಿ ಆಗಿರುವುದರಿಂದ ಹಾಗೂ ವಾಹನವು ರಸ್ತೆಯಲ್ಲಿ ಚಲಿಸಲು ಅನರ್ಹವಾಗಿರುವುದಾಗಿ ನೊಂದಣಿ ರದ್ದುಪಡಿಸಲು ಕೋರಿದ್ದಾರೆ. ಇವರ ಕೋರಿಕೆಯಂತೆ ಈ ವಾಹನದ ನೊಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ:ಪ್ರಾಸಾಅ:ಚಿಮ: ಎಫ್‌ಟಿಟಿ: 04-05/06, ದಿನಾಂಕ:2ನೇ ಏಪ್ರಿಲ್, 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂಖ್ಯೆ: ಎಂವೈಎಸ್-5882 ಲಾರಿ, ನೊಂದಣಿ ಹಾಗೂ ನೊಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡು ಬಂದಲ್ಲಿ ವಾಹನದ ಮಾಲಿಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

1. ವಾಹನ ಸಂಖ್ಯೆ: ಎಂ.ವೈ.ಎಸ್. 5882
2. ವರ್ಗ: -
3. ಮಾಡೆಲ್ : 1966
4. ನೊಂದಣಿ ದಿ: 09.11.1967.
5. ಚಾಸಿಸ್ ಸಂ: ಎ.ಎಲ್. 6626003.
6. ಇಂಜಿನ್ ಸಂ: ಎ.ಎಲ್.ಇ.500
7. ತೆರಿಗೆ ಪಾವತಿ : 30.04.1992.
8. ಹೆಚ್‌ಪಿಎ : ಇಲ್ಲ.
9. ಎಸ್‌ಆರ್ ಸಂ: 491 91-92
10. ಮಾಲಿಕರು : Executive Engin. (EVE. Civil) KEB.

**ಆರ್. ರಾಜಶೇಖರ್**
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ
ನೊಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

ಪಿ.ಆರ್.1440

## ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ

**ಉಪಸ್ಥಿತರು :** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ :** ಕೆಎ.18-1223 ಲಾರಿ, ಇದರ ನೋಂದಣಿ ರದ್ದು ಪಡಿಸುವ ಬಗ್ಗೆ.

**ಉಲ್ಲೇಖ :**
1. ಮಾಲಿಕರು ಶ್ರೀ ಟಿ.ಎಸ್. ಸುರೇಶ್, ಇವರ ಅರ್ಜಿ ದಿನಾಂಕ: 15.02.2005.
2. ಅಧ್ಯರ್ಪಣ ಸಂಖ್ಯೆ: 6: 98-99, ದಿನಾಂಕ: 13.05.1998.
3. ಮೋಟಾರು ವಾಹನ ನಿರೀಕ್ಷಕರ ವರದಿ ದಿನಾಂಕ: 28.02.2005.

ಈ ಕಛೇರಿಯ ದಾಖಲೆಗಳಂತೆ ವಾಹನ ಸಂಖ್ಯೆ: ಕೆಎ 18-1223 ಇದರ ನೋಂದಾಯಿತ ಮಾಲಿಕರಾದ ಶ್ರೀ ಟಿ.ಎಸ್. ಸುರೇಶ್ ಚಿನ್ನಪ್ಪ, ರವರು ಸದರಿ ವಾಹನದ ತೆರಿಗೆಯನ್ನು 30.06.1998 ರವರೆಗೆ ಪಾವತಿಸಿ ಮುಂದಿನ ತೆರಿಗೆಯಿಂದ ವಿನಾಯಿತ ಪಡೆಯಲು ಸದರಿ ವಾಹನದ ಅನುಪಯೋಗದ ಮಾಹಿತಿ ನೀಡಿ ಕಛೇರಿಗೆ ವಾಹನದ ಎಲ್ಲಾ ದಾಖಲೆಗಳನ್ನು ಅಧ್ಯರ್ಪಣ ಸಂಖ್ಯೆ: 6198199ರಲ್ಲಿ ದಿನಾಂಕ: 13.01.1998 ರಿಂದ ಅಧ್ಯರ್ಪಣ ಮಾಡಿದ್ದು, ಇಂದಿಗೂ ಅಧ್ಯರ್ಪಣ ಮುಂದುವರೆದಿದೆ.

ಕಛೇರಿಗೆ ದಿನಾಂಕ: 15.02.2005, 10.03.2005 ರಂದು ಅರ್ಜಿ ಸಲ್ಲಿಸಿ ಈ ವಾಹನವು 1980 ರ ಮಾಡೆಲ್ ಆಗಿದ್ದು ರಸ್ತೆಯಲ್ಲಿ ಓಡಿಸಲು ಅನರ್ಹವಿರುವುದಾಗಿ ಮಾಹಿತಿ ನೀಡಿ ನೋಂದಣಿ ರದ್ದು ಪಡಿಸಲು ಕೋರಿರುತ್ತಾರೆ. ಪೂರಕವಾಗಿ ಈ ಕಛೇರಿಯಿಂದ ಮೋಟಾರು ವಾಹನ ನಿರೀಕ್ಷಕರವರು ಈ ವಾಹನದ ಸ್ಥಿತಿಗತಿ ಪರಿಶೀಲಿಸಿ ಕಛೇರಿಗೆ ದಿನಾಂಕ: 28.02.2005 ರಂದು ಸಲ್ಲಿಸಿದ ವರದಿಯಲ್ಲಿ ಈ ವಾಹನದ ನೋಂದಣಿ ರದ್ದು ಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಆದರಂತೆ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಿದೆ.

### ಆದೇಶ

### ಸಂಖ್ಯೆ:ಪ್ರಾಸಾಅ:ಚಿಮ: ಎಫ್‌ಟಿ:ಸಾರಿಗೆ: 04-05, ದಿನಾಂಕ:28ನೇ ಮಾರ್ಚ್, 2005

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂಖ್ಯೆ: ಕೆಎ-18-1223-ಲಾರಿ, ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡು ಬಂದಲ್ಲಿ ವಾಹನದ ಮಾಲಿಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

1. ವಾಹನ ಸಂಖ್ಯೆ: ಕೆಎ-18-1223
2. ವರ್ಗ: ಘನ ಸಹಾಯ ವಾಹನ
3. ಮಾಡೆಲ್ : 1980
4. ತಯಾರಿಕೆ ದಿ:
5. ಚಾಸಿಸ್ ಸಂ: 344073 722893
6. ಯಂತ್ರದ ಸಂ: 692 ಡಿ01 723274
7. ತೆರಿಗೆ ಪಾವತಿ : 30.06.1998.
8. ಹೆಚ್‌ಪಿಎ : ಇಲ್ಲ.
9. ನೋಂದಣಿ ದಿ: 04.12.90
10. ಮಾಲಿಕರು :ಶ್ರೀ T.S. Suresh S/o K.S. Thamman, PWD Contractor, H.No.E-105-58, Jyothi Nagar.

**ಆರ್. ರಾಜಶೇಖರ್**
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ
ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

ಪಿ.ಆರ್.1441

## ಕರ್ನಾಟಕ ಲೋಕ ಸೇವಾ ಆಯೋಗ

**ವಿಷಯ :** 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಎಂ. ವಾಗೀಶರಾಧ್ಯ ಇವರು ಎಸಗಿರುವ ದುರಾಚಾರ-ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :**
1. 2005ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಶ್ರೀ ಎಂ. ವಾಗೀಶರಾಧ್ಯ ಇವರ ಅರ್ಜಿ ದಿನಾಂಕ:20.04.2005.
2. ಶ್ರೀ ಎಂ. ವಾಗೀಶರಾಧ್ಯ ಇವರಿಗೆ ಜಾರಿ ಮಾಡಲಾದ ಕಾರಣ ಕೇಳುವ ನೋಟಿಸು ಸಂಖ್ಯೆ: ಇಪ(1)421-22/ 2005-06/ ಪಿಎಸ್‌ಸಿ, ದಿನಾಂಕ: 22.07.2005
3. ಶ್ರೀ ಎಂ. ವಾಗೀಶರಾಧ್ಯ ಇವರು ದಿನಾಂಕ: 28.07.2005 ಹೇಳಿಕೆ.

**ಪ್ರಸ್ತಾವನೆ:**

ಕರ್ನಾಟಕ ಲೋಕ ಸೇವಾ ಆಯೋಗವು ನಡೆಸಿದ 2005ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗೆ ಶ್ರೀ ಎಂ. ವಾಗೀಶರಾಧ್ಯ ದ್ವಿತೀಯ ದರ್ಜೆ ಲೆಕ್ಕ ಸಹಾಯಕ, ಕೃ.ಭಾ.ಜ.ನಿ.ನಿ. ಜೆಬಿಸಿ ವಿಭಾಗ ಸಂಖ್ಯೆ:3, ಚಿಗರಳ್ಳಿ ಕ್ಯಾಂಪ್, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರ ನೋಂದಣಿ ಸಂಖ್ಯೆ: 38671ರಡಿ ಪುಸ್ತಕಗಳನ್ನು ನೋಡಿಕೊಳ್ಳದೆ ಬರೆಯಬೇಕಾಗಿರುವ ಎಸ್.ಎ.ಎಸ್. ಭಾಗ-1ರ ಪತ್ರಿಕೆ-2ಕ್ಕೆ 23.05.2005ರ ಅಪರಾಹ್ನ ಗುಲ್ಬರ್ಗಾ ಪರೀಕ್ಷಾ ಕೇಂದ್ರದಲ್ಲಿ ಹಾಜರಾಗಿದ್ದು, ಪರೀಕ್ಷಾ ವೇಳೆಯಲ್ಲಿ ಪರೀಕ್ಷಾ ಕೊಠಡಿಯ ಸಂವೀಕ್ಷಕರು ತಪಾಸಣೆ ಮಾಡುವ ಸಂದರ್ಭದಲ್ಲಿ "ದಿ ಕರ್ನಾಟಕ ಮುನಿಸಿಪಾಲಿಟೀಸ್ 1964" ಪುಸ್ತಕವನ್ನು ನೋಡಿಕೊಂಡು ನಕಲು ಮಾಡುತ್ತಿದ್ದುದ್ದನ್ನು (ಪರೀಕ್ಷಾ ಕೇಂದ್ರದ ಅಪರ ಪರಿವೀಕ್ಷಕರು) ಗಮನಿಸಿ

ಅದರಿಂದ ಸದರಿ ಪುಸ್ತಕವನ್ನು ಹಾಗೂ ಉತ್ತರ ಪತ್ರಿಕೆಗಳನ್ನು ವಶಪಡಿಸಿಕೊಂಡು ನಂತರ ಅದರಿಂದ ಲಿಖಿತ ಹೇಳಿಕೆ ಪಡೆದು ಆಯೋಗಕ್ಕೆ ವರದಿ ಸಲ್ಲಿಸಿರುತ್ತಾರೆ.

ಇಲಾಖಾ ಪರೀಕ್ಷೆಗಳನ್ನು ಬರೆಯಲು ಅಭ್ಯರ್ಥಿಗಳಿಗೆ ನೀಡಿದ ಪ್ರವೇಶಪತ್ರಗಳ ಹಿಂಬದಿಯಲ್ಲಿ ಮುದ್ರಿಸಿರುವ "ಅಭ್ಯರ್ಥಿಗಳಿಗೆ ಸೂಚನೆಗಳು" ಇದರಲ್ಲಿ ಇತರೆ ಸೂಚನೆಗಳೊಂದಿಗೆ ಪರೀಕ್ಷಾ ಕೊಠಡಿಯಲ್ಲಿ ಅನಧಿಕೃತ ಪುಸ್ತಕಗಳು, ಟಿಪ್ಪಣಿಗಳು, ಚೀಟಿಗಳು, ಇತ್ಯಾದಿಗಳನ್ನು ತರುವುದು ನಿಷೇಧಿಸಲಾಗಿದೆಯೆಂದು ತಿಳಿಸಿದ್ದರೂ ಸಹ, ಆ ಸೂಚನೆಗಳನ್ನು ಶ್ರೀ ವಾಗೀಶರಾಧ್ಯ ಇವರ ಮೇಲೆ ವಿವರಿಸಿರುವಂತೆ ಉಲ್ಲಂಘಿಸಿ, ದುರಾಚಾರ ಎಸಗಿರುತ್ತಾರೆ. ಆದಕಾರಣ, ಪರೀಕ್ಷಾ ಕೇಂದ್ರದ ಮುಖ್ಯ ಪರಿವೀಕ್ಷಕರು ಆಯೋಗಕ್ಕೆ ಸಲ್ಲಿಸಿದ ವರದಿ ಮತ್ತು ಸಂಬಂಧಿಸಿದ ದಾಖಲೆಗಳನ್ನು ಆಧಾರಿಸಿ ಸದರಿ ಅಭ್ಯರ್ಥಿಗೆ ಮೇಲೆ (2)ರಲ್ಲಿ ಓದಲಾಗಿರುವ ಕಾರಣಕೇಳುವ ನೋಟೀಸನ್ನು ಜಾರಿಮಾಡಿ ಅದರಲ್ಲಿ ತಿಳಿಸಿರುವ ದಂಡನೆಯನ್ನು ಏಕೆ ವಿಧಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಯಿತು. ಶ್ರೀ ವಾಗೀಶರಾಧ್ಯ ಇವರು ಕಾರಣಕೇಳುವ ನೋಟಿಸನ್ನು ಸ್ವೀಕರಿಸಿದ್ದು, ಮೇಲೆ (3)ರಲ್ಲಿ ಓದಲಾಗಿರುವ ಅವರ ಹೇಳಿಕೆಯಲ್ಲಿ ಪುಸ್ತಕವನ್ನು ನೋಡಿ ನಕಲು ಮಾಡುತ್ತಿದ್ದುದನ್ನು ಒಪ್ಪಿಕೊಂಡಿದ್ದು ಇನ್ನು ಮುಂದೆ ಇಲಾಖಾ ಪರೀಕ್ಷೆಯ ನಿಯಮಾವಳಿ ಪ್ರಕಾರ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದಾಗಿಯೂ ಅವರ ವಿರುದ್ಧ ಕೈಗೊಳ್ಳಬೇಕೆಂದಿರುವ ಕ್ರಮವನ್ನು ಮಾನ್ಯ ಮಾಡಬೇಕೆಂದು ವಿನಂತಿಸಿರುತ್ತಾರೆ.

ಶ್ರೀ ವಾಗೀಶರಾಧ್ಯರವರು ಪರೀಕ್ಷೆಯ ಸಮಯದಲ್ಲಿ ದುರಾಚಾರ ನಡೆಸಿರುವುದು ಒಪ್ಪಿಕೊಂಡಿದ್ದು, ಅವರ ಮೇಲಿನ ಆರೋಪವು ಸಾಬೀತಾಗಿದ್ದು, ಆಯೋಗವು ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳು 1965ರ ಅನ್ವಯ ಅವರಿಗೆ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ತೀರ್ಮಾನಿಸಿ ಕೆಳಕಂಡಂತೆ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ (1) 1581/ 2005-06/ ಪಿಎಸ್‌ಸಿ, ದಿನಾಂಕ:28ನೇ ಸೆಪ್ಟೆಂಬರ್, 2005**

ಕರ್ನಾಟಕ ಲೋಕ ಸೇವಾ ಆಯೋಗ (ಸೇವಾ ಪರೀಕ್ಷೆ ನಿರ್ವಹಣೆ) ನಿಯಮಗಳು 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ ಆಡಳಿತ 398/93-94/ ಪಿಎಸ್‌ಸಿ ದಿನಾಂಕ: 14.09.1993ರ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ವಾಗೀಶರಾಧ್ಯ, ದ್ವಿ.ದ. ಲೆಕ್ಕ ಸಹಾಯಕ, ಕೃ.ಭಾ.ಜ. ನಿಗಮ ಕಾರ್ಯನಿರ್ವಾಹಕ ಅಭಿಯಂತರರ ಕಛೇರಿ, ಜೆಬಿಸಿ ವಿಭಾಗ ಸಂಖ್ಯೆ:3, ಚಿಗರಳ್ಳಿ ಕ್ಯಾಂಪ್, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರಿಗೆ 2005ನೆ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಗೆ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ,
ಕಾರ್ಯದರ್ಶಿ ಹಾಗೂ ನಿಯಂತ್ರಕರು,
ಇಲಾಖಾ ಪರೀಕ್ಷೆಗಳು,
ಕರ್ನಾಟಕ ಲೋಕ ಸೇವಾ ಆಯೋಗ.

ಪಿ.ಆರ್.1442

**SOCIAL WELFARE DEPARTMENT**
**NOTIFICATION**
**No. SWD 227 SAD 2003, Bangalore, Dated: 24th September, 2005**

From time to time representations have been made to the State Government that disproportionate majority of the benefits given by the Government to Scheduled Castes have gone to certain castes, reaces or tribes of Scheduled Castes in the State of Karnataka, and that those benefits should be evenly shared by all the castes, races or tribes of the Scheduled Castes.

The Supreme Court in the case of E.V. CHINNAIAH V. STATE OF ANDHRA PRADESH (AIR 2005 S.C. 162) while considering the validity of a law by which Scheduled Castes were reclassified into four groups and the reservation already made was apportioned between them, has observed as follows:

> "If benefits of reservation are not percolating equitably, measures should be taken to see that they give such adequate or additional training so as to enable them to compete with other"
>
> "The very fact that the members of the Scheduled Castes are most backward amongst the backward classes and the impugned legislation having already proceeded on the basis that they are not adequately represented both in terms of clause (4) of Article 15 and clause (4) of Article 16 of the Constitution of India, a further classification by way of micro classification is not permissible. Such classification of the members of different classes of people based on their respective castes would also be violative of the doctrine of reasonableness. Article 341 provides that exclusion even of a part or a group of castes from the Presidential List can be done only by the Parliament. The logical corollary thereof would be that the State Legislatures are forbidden from doing that"

Hon'ble Justice Sinha, who concurred with the other Judges posed the problem under the heading **"What is the remedy?"** In para 123 he has analyzed the problem and has observed thus-

> "There is one practical aspect of the matter which may not also be lost sight of. The chart produced before us clearly shows that the members belonging to Relli and Adi-Andhra are hardly educated. What was necessary in the situation was to provide to them scholarships, hostel facilities, special coaching, etc., so that they may be brought on the same platform with the members of other Scheduled Tribes, viz, Madiga and Mala, if not with the other backward

classes. It is not disputed that members belonging to Relli are hardly educated. Only 2% of the members of the said community have studied in secondary schools. No one has ever been admitted in any engineering discipline or other professional disciplines. The said facts clearly go to show that providing reservation for them in engineering or medical discipline or in public service would not solve their problem. Without such basic education, the members belonging to the said community would not be getting admission either in the engineering or medical colleges or other professional coureses and as such the question of their joining public service may not arise at all. Now, even for the post of Class IV employees, qualification of passing matriculation examination is provided. Unless children of the said community are educated, the provision both for education as also public service would be a myth for them and ultimately in view of the empougned legislation for all intent and purport, the benefit thereof would go to other categories. The State, in our opinion, should take positive steps in this behalf."

Article 341(2) of the Constitution of India empowers the Parliament to exclude any part of or group within any castes, races or tribes of Scheduled Castes notified by the President under article 341(1) of the Constitution.

Having regard to the representations made before the State Government, the observations of the Hon'ble Supreme Court quoted above, and the provisions of article 341 (2) of the CONStitution, the Government of Karnataka is of opinion that it is necessary to appoint a Commission of Inquiry in this regard, which is matter of public importance.

Now, therefore, in exercise of the powers conferred by Section 3 of the Commissions of Inquiry Act, 1952 (Central Act 60 of 1952), the Government of Karnataka hereby appoints a Commission of Inquiry consisting of Hon'ble Mr. Justice A.J. Sadashiva (Retd) to identify the particular castes, races and tribes of Scheduled Castes in the State of Karnataka to whom the benefits of reservation are not percolating equitably and to suggest within a period of twelve months what are all the measures and positive steps that should be taken so as to enable them to compete with other categories of the Scheduled Castes in the State and other relevant aspects.

The terms of reference of the Commission shall be as follows:

1) Examine and report whether the benefits of reservation extended by the Government to the Scheduled Castes under Articles 15 and 16 of the Constitution have been enjoyed by all castes, races and tribes of Scheduled Castes equitably.

2) If not,
   (i) Reasons (educational, economical or others) for the same.
   (ii) The extent to which different castes, races and tribes of scheduled castes have enjoyed those benefits;
   (iii) Steps that may be taken to ensure that the benefits are equitably distributed among the different castes, races and tribes of scheduled castes;
   (iv) Any other matter, relevant or incidental to or arising out of the matter referred to above.

By order and in the name of the Governor of Karnataka,

**M. PRANADEVA**

PR-1443

Deputy Secretary to Government,
Social Welfare Department.

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್

**ವಿಷಯ :** ಸ್ಥಗೀತಗೊಂಡ **ಹಾಲು ಉತ್ಪಾದಕರ ಸಹಕಾರ ಸಂಘ** ನಿ. ನಿ. **ಭಾತಂಬ್ರಾ, ತಾ: ಬಾಲ್ಕಿ** ಇದನ್ನು ಸಹಕಾರ ಕಾಯ್ದೆ, 1959ರ ಕಲಂ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇದರ ಪತ್ರ ಸಂಖ್ಯೆ: ಸವಿಬಿ1/ ವಿ6/ ಸಮಾಪನೆ/ ಸಿಆರ್-2005-2006/ ದಿನಾಂಕ: 12.08.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ನೊಂದಣಿ ಸಂಖ್ಯೆ: ಆರ್ಎಸ್ಆರ್/ ಪಿಡಿಆರ್/ ಎಂಪಿಸಿಎಸ್/ 6/ 7968/ ದಿನಾಂಕ: 01.06.1979ರಲ್ಲಿ ನೊಂದಣಿ **ಹಾಲು ಉತ್ಪಾದಕರ ಸಹಕಾರ ಸಂಘ** ನಿ., ನಿ. **ಭಾತಂಬ್ರಾ ತಾ: ಬಾಲ್ಕಿ** ಈ ಸಂಘವು ಸುಮಾರು 5 ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆ ಗೊಳಿಸಲು ಉಲ್ಲೇಖ (1)ರ ಮುಖೀನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ. ಹಾಗೂ ಸಂಘದ ಸಮಾಪನೆ ಬಗ್ಗೆ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೇಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ

ಪ್ರಯೋಜನ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ್ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಉನಿಬಿ/ ವಿ2/ ಸಮಾಪನೆ/ ಸಿಆರ್: 2005-2006/ 2612, ದಿನಾಂಕ:27/28ನೇ ಸೆಪ್ಟೆಂಬರ್, 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/ 69/ ಸಿಎಲ್ಎಂ/ 200/ ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ.ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ, ಬೀದರ್ ಆದ ನಾನು ಸ್ಥಗೀತಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಭಾತಂಬ್ರಾ, ತಾ: ಬಾಲ್ಕಿ, ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಬಾಲ್ಕಿ** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ- ಜವಾಬ್ದಾರ ವಿಲೇಗೊಳಿಸಲು ಅಧ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೊಂದಣಿ ಸಂಖ್ಯೆ: ರದ್ದತಿಗಾಗಿ ಈ ಆದೇಶವು 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ: 27.09.2005ರಂದು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಪಿ.ಆರ್.1444 ಬೀದರ್.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ :** ಸ್ಥಗೀತಗೊಂಡ **ಮಹಾತ್ಮ ಶ್ರೀ ರಾಮರಾವ ಮಹಾರಾಜ ಭಾರತೀಯ ಬಂಜಾರ ಪತ್ತಿನ ಸಹಕಾರ ಸಂಘ ನಿ. ನಿ, ಔರಾದ್(ಬಿ) ತಾ: ಔರಾದ್ (ಬಿ)** ಇದನ್ನು ಸಹಕಾರ ಕಾಯ್ದೆ, 1959ರ ಕಲಂ 72(2) ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇದರ ಪತ್ರ ಸಂಖ್ಯೆ: ಸವಿಬಿ1/ ವಿ6/ ಸಮಾಪನೆ/ ಸಿಆರ್-2005-2006/ ದಿನಾಂಕ: 12.08.2005.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ನೊಂದಣಿ ಸಂಖ್ಯೆ: ಸನಿಬಿ1/ವಿ4/ ಯುಬಿಸಿ/ ಯುಬಿಎ/ 7092/ 2000-2001, ದಿನಾಂಕ:13.04.2000ರಲ್ಲಿ ನೊಂದಣಿ **ಮಹಾತ್ಮ ಶ್ರೀ ರಾಮರಾವ ಮಹಾರಾಜ ಭಾರತೀಯ ಬಂಜಾರ ಪತ್ತಿನ ಸಹಕಾರ ಸಂಘ ನಿ. ಔರಾದ್ (ಬಿ) ತಾ: ಔರಾದ** ಈ ಸಂಘವು ಸುಮಾರು ವರ್ಷಗಳಿಂದ ತನ್ನ ಕಾರ್ಯಚಟುವಟಿಕೆಗಳನ್ನು ನಡೆಸದೆ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ. ಆದ್ದರಿಂದ ಇದನ್ನು ಸಮಾಪನೆ ಗೊಳಿಸಲು ಉಲ್ಲೇಖ (1)ರ ಮುಖೀನ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಸದರಿ ಸಂಘದ ಸದಸ್ಯರಿಗೆ ಸಂಘದ ಪುನಃಶ್ಚೇತನಗೊಳಿಸಲು ಆಸಕ್ತಿ ಇರುವುದಿಲ್ಲ. ಹಾಗೂ ಸಂಘದ ಸಮಾಪನೆ ಬಗ್ಗೆ ಯಾರಿಂದಲೂ ಯಾವುದೇ ತರಹದ ಆಕ್ಷೇಪಣೆ ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಪ್ರಯುಕ್ತ ಈ ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಇನ್ನಷ್ಟು ಸಂಘದ ಸ್ಥಿತಿ ಹದಗೇಡುವ ಸಂಭವವಿರುವುದರಿಂದ ಮತ್ತು ಸದಸ್ಯರಿಗೆ ಯಾವುದೇ ರೀತಿಯ ಪ್ರಯೋಜನ ಇಲ್ಲವೆಂದು ಮನಗಂಡು ಸಹಾಯಕ ನಿಬಂಧಕರು, ಬೀದರ್ ರವರು ಇದನ್ನು ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿರುವುದರಿಂದ, ಮತ್ತು ಇದನ್ನು ಪುನಃಶ್ಚೇತಗೊಳಿಸುವಲ್ಲಿ ಸದಸ್ಯರಲ್ಲಿ ಆಸಕ್ತಿ ಕಂಡು ಬಂದಿಲ್ಲವಾದ್ದರಿಂದ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಉನಿಬಿ/ ವಿ2/ ಸಮಾಪನೆ/ ಸಿಆರ್: 2005-2006/ 2604, ದಿನಾಂಕ:27/28ನೇ ಸೆಪ್ಟೆಂಬರ್, 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ/ 69/ ಸಿಎಲ್ಎಂ/ 200/ ದಿನಾಂಕ: 21.11.2001ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ **ಎಂ.ಡಿ.ಮಠಪತಿ** ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್ ಜಿಲ್ಲೆ, ಬೀದರ್ ಆದ ನಾನು ಸ್ಥಗೀತಗೊಂಡ **ಮಹಾತ್ಮ ಶ್ರೀ ರಾಮರಾವ ಮಹಾರಾಜ ಭಾರತೀಯ ಬಂಜಾರ ಪತ್ತಿನ ಸಹಕಾರ ಸಂಘ ನಿ., ಔರಾದ(ಬಿ) ತಾ: ಔರಾದ (ಬಿ),** ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 73(1)ರನ್ವಯ **ಸಹಕಾರ ಅಭಿವೃದ್ಧಿ ಅಧಿಕಾರಿ, ಬಾಲ್ಕಿ** ಇವರಿಗೆ ಸದರಿ ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮಗಳು 1960ರ ನಿಯಮ 33ರ ನಿರ್ದೇಶನಗಳನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ- ಜವಾಬ್ದಾರ ವಿಲೇಗೊಳಿಸಲು ಅಧ್ಯತಾ ಪಟ್ಟಿ ಸಲ್ಲಿಸುವುದು ಹಾಗೂ ಅನುಮೋದನೆ ಪಡೆದು ಆಸ್ತಿ ಜವಾಬ್ದಾರಿ ವಿಲೇಗೊಳಿಸಿ ನೊಂದಣಿ ಸಂಖ್ಯೆ: ರದ್ದತಿಗಾಗಿ ಈ ಆದೇಶವು 30 ದಿವಸಗಳೊಳಗಾಗಿ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ಇಂದು ದಿನಾಂಕ: 27.09.2005ರಂದು ಹೊರಡಿಸಲಾಗಿದೆ.

ಪಿ.ಆರ್.1445 ಸಹಕಾರ ಸಂಘಗಳ ಉಪ ನಿಬಂಧಕರು, ಬೀದರ್.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ**

**ಸಂಖ್ಯೆ:ಡಿಆರ್/ ಡಿವಿಜಿ/ ಎಲ್‌ಕ್ಯೂಡಿ/ ಸಿಆರ್ 23/ 2004-2005, ದಿನಾಂಕ:19ನೇ ಸೆಪ್ಟೆಂಬರ್, 2005**

**ವಿಷಯ :** ಸ್ಥಗಿತಗೊಂಡಿರುವ **ಬೆನ್ನೂರು ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆನ್ನೂರು, ಹರಿಹರ ತಾಲ್ಲೂಕು** ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ :** 1. ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರ ಪ್ರಸ್ತಾವನೆ ದಿನಾಂಕ: 21.10.2004 ಮತ್ತು 06.08.2005.
2. ಈ ಕಛೇರಿಯ ಕಾರಣ ಕೇಳುವ ನೋಟೀಸ್ ಸಮಸಂಖ್ಯೆ: ಪತ್ರ ದಿನಾಂಕ: 27.07.2005.

**ಪ್ರಸ್ತಾವನೆ:**

ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಮೇಲ್ಕಂಡ ಸಂಘದ ಕಾರ್ಯಚಟುವಟಿಕೆಗಳು ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತದೆ. ಮತ್ತು ಸಂಘವನ್ನು ಪುನಶ್ಚೇತನಗೊಳಿಸವುಲ್ಲಿ ಆಸಕ್ತಿ ಇರುವುದಿಲ್ಲ. ಈ ಬಗ್ಗೆ ಉಲ್ಲೇಖ (2)ರ ನೋಟೀಸು ನೀಡಿದ್ದು, ಇದಕ್ಕೆ ಯಾರಿಂದಲೂ ಪ್ರತಿಕ್ರಿಯೆ ಬಂದಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ. ಸಂಘವನ್ನು ಇದೇ ರೀತಿ ಮುಂದುವರೆಯಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಕೆ.ಎಂ. ಆಶಾ, ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಬೆನ್ನೂರು ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆನ್ನೂರು ಹರಿಹರ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ, ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಅಧಿಕಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ: 19.09.2005ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.1446

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಬೆಂಗಳೂರು**

**ಸಂಖ್ಯೆ:ಜೆಆರ್‌ಬಿ: ಎಲ್‌ಕ್ಯೂಡಿ:26: ಎಲ್‌ಎಂಸಿ: 1998-99, ದಿನಾಂಕ:23ನೇ ಸೆಪ್ಟೆಂಬರ್, 2005**

**ವಿಷಯ :** ಜಗಳೂರು ತಾಲ್ಲೂಕು ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಜಗಳೂರು ಇದರ ನೋಂದಣಿ ಸಂಖ್ಯೆ ರದ್ದುಪಡಿಸುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿಯ ಆದೇಶ ಸಮಸಂಖ್ಯೆ: ದಿನಾಂಕ: 11.12.98.
2. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ರವರ ಪ್ರಸ್ತಾವೆ ಸಂಖ್ಯೆ:ಡಿ.ಆರ್.:ಡಿವಿಜಿ: ಸಮಾಪನೆ:63:96-97, ದಿನಾಂಕ: 06.06.2005.

ಜಗಳೂರು ತಾಲ್ಲೂಕು ಮಹಿಳಾ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಜಗಳೂರು, ದಾವಣಗೆರೆ ಜಿಲ್ಲೆ ಈ ಸಹಕಾರ ಸಂಘವು ಉಪನಿಬಂಧಕರು, ದಾವಣಗೆರೆಯವರ ನೋಂದಣಿ ಸಂಖ್ಯೆ: ಡಿಆರ್‌ಡಿ:ಆರ್‌ಎಸ್‌ಆರ್.9710:92-93, ದಿನಾಂಕ: 12.03.93ರಂತೆ ನೋಂದಾವಣೆಯಾಗಿದ್ದು, ದಾವಣಗೆರೆ ಜಿಲ್ಲೆಯ ಜಗಳೂರು ತಾಲ್ಲೂಕಿನ ಕಾರ್ಯವ್ಯಾಪ್ತಿಯನ್ನು ಹೊಂದಿರುತ್ತದೆ. ಈ ಸಂಘವು ಸರಿಯಾಗಿ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿರುವ ಕಾರಣ ಉಲ್ಲೇಖ (1)ರ ಆದೇಶದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ರನ್ವಯ ಸಂಘವನ್ನು ಸಮಾಪನೆಗೊಳಿಸಲಾಗಿದ್ದು, ಕಲಂ 73 ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಜಗಳೂರು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಈ ರೀತಿ ನೇಮಕಗೊಂಡಿರುವ ಸಮಾಪನಾಧಿಕಾರಿಯು ದಿನಾಂಕ: 21.05.2005ರಂದು ಸಂಘದ ಸಮಾಪನಾ ನಡವಳಿಕೆ ನಡೆಸಿದ್ದು, ಸಂಘದ 2003-04ನೇ ಸಾಲಿನ ಲೆಕ್ಕಪರಿಶೋಧನೆಯಲ್ಲಿನ ಆಸ್ತಿ-ಜವಾಬ್ದಾರಿ ತಃಖ್ತೆಯ ಆಧಾರದ ಮೇಲೆ ಆಸ್ತಿ-ಜವಾಬ್ದಾರಿಗಳನ್ನು ಹೊಂದಾಣಿಕೆ ಮುಖಾಂತರ ವಿಲೇವಾರಿ ಮಾಡಿ ಶೂನ್ಯಗೊಳಿಸಲಾಗಿದ್ದು, ಸಂಘದಲ್ಲಿ ವಸೂಲಾಗತಕ್ಕ ಆಸ್ತಿ ಮತ್ತು ಕೊಡಬೇಕಾದ ಜವಾಬ್ದಾರಿಗಳು ಯಾವುವು ಇಲ್ಲದ ಕಾರಣ, ಸಂಘದ ಸಂಖ್ಯೆಯನ್ನು ರದ್ದುಪಡಿಸುವುದರಿಂದ ಯಾರಿಗೂ ತೊಂದರೆ ಆಗುವುದಿಲ್ಲವೆಂದು ಪರಿಗಣಿಸಿ, ಸಂಘದ ಸಮಾಪನಾಧಿಕಾರಿಯವರು ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸಬೇಕೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿರವರ ಮುಖೇನ ಶಿಫಾರಸ್ಸು ಮಾಡಿ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ರವರು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಸಂಘದ ನೋಂದಣಿ ಸಂಖ್ಯೆ:ಡಿಆರ್‌ಡಿ:ಆರ್‌ಎಸ್‌ಆರ್: 9710:92-93 ದಿನಾಂಕ: 12.03.93ನ್ನು ರದ್ದಪಡಿಸಬೇಕೆಂದು ಶಿಫಾರಸ್ಸು ಮಾಡಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಸಂಘದಲ್ಲಿ ವಸೂಲಾಗತಕ್ಕ ಆಸ್ತಿ ಮತ್ತು ಕೊಡಬೇಕಾದ ಜವಾಬ್ದಾರಿಗಳು ಯಾವುವು ಇಲ್ಲದ ಕಾರಣ ಹಾಗೂ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವುದರಿಂದ ಯಾರಿಗೂ ತೊಂದರೆಯಾಗದೇ ಇರುವುದರಿಂದ ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆಯವರ ಕೋರಿಕೆಯಂತೆ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವುದೇ ಸೂಕ್ತವೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ: 21.11.2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, **ಕೆ.ಹೆಚ್.ತಿಮ್ಮಯ್ಯ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು** ಆದ ನಾನು ಸಮಾಪನೆಯಲ್ಲಿರುವ **ಜಗಳೂರು ತಾಲ್ಲೂಕು ಮಹಿಳಾ**

**ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಜಗಳೂರು, ದಾವಣಗೆರೆ ಜಿಲ್ಲೆ,** ಈ ಸಹಕಾರ ಸಂಘದ ನೋಂದಣಿ ಸಂಖ್ಯೆ:ಡಿಆರ್‌ಡಿ: ಆರ್‌ಎಸ್‌ಆರ್:9710:92-93 ದಿನಾಂಕ: 12.03.93ನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆಯೆಂದು ಇದರ ಕಾರ್ಯಚಟುವಟಿಕೆಗಳು ವಿಸರ್ಜಿತವಾಗಿದೆಯೆಂದೂ ಪರಿಗಣಿಸತಕ್ಕದ್ದು. ಈ ಸಂಘಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಈ ಆದೇಶದ ದಿನಾಂಕದಿಂದ 3 ವರ್ಷಗಳವರೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 23.09.2005ರಂದು ಕಛೇರಿ ಮೊಹರು ಹಾಗೂ ಸ್ವಸಹಿಯೊಂದಿಗೆ ಹೊರಡಿಸಲಾಗಿದೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್.1447

## ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ, ಬೀದರ್ ಜಿಲ್ಲೆ, ಬೀದರ್

### ರಾಜ್ಯಪತ್ರ ಪ್ರಕಟಣೆ

### ಸಂಖ್ಯೆ:ಇ3: ದೂರು: ವಿಚಾ:ಅಗೈಹಾ:37: 99-2000, ದಿನಾಂಕ:28ನೇ ಸೆಪ್ಟೆಂಬರ್, 2005

ಶ್ರೀ ಚಂದ್ರಶೇಖರ ದ್ವಿ.ದ. ಸಹಾಯಕ ಸರ್ಕಾರಿ ಪ್ರೌಢ ಶಾಲಾ ಕಣಜಿ ತಾ: ಬಾಲ್ಕಿ ಜಿ: ಬೀದರ್ ಆದ ನೀವು ನಿಮ್ಮ ಕರ್ತವ್ಯಕ್ಕೆ ದಿನಾಂಕ: 09.02.1999 ರಿಂದ ಇಂದಿನ ವರೆಗೆ ಸತತವಾಗಿ ಅನಧಿಕೃತ ಗೈರು ಹಾಜರಾಗುತ್ತೀರಿ. ಇದಕ್ಕೆ ಸಂಬಂಧಿಸಿದಂತೆ ಸೇವೆಗೆ ಹಾಜರಾಗಲು ಈ ಕಛೇರಿಯ ಪತ್ರ ಸಂಖ್ಯೆ: ದಿನಾಂಕ: 01.02.2003, 11.12.2000, 07.12.2002 ಮತ್ತು 14.03.2005ರಂತೆ ಹಾಗೂ ಸ್ಥಳೀಯ ಮತ್ತು ರಾಜ್ಯ ಪತ್ರಿಕೆಗಳಲ್ಲಿ ಸೂಚಿಸಿರುವ ಆದೇಶದ ಪ್ರಕಾರ ಸಾಕಷ್ಟು ಸಲ ಕಾಲವಕಾಶ ನೀಡಿದರೂ ಸಹ ನೀವು ಸೇವೆಗೆ ಹಾಜರಾಗಲು ವಿಫಲರಾಗಿರುತ್ತೀರಿ. ಈಗ ನಿಮಗೆ ಅಂತಿಮ ಅವಕಾಶ ನೀಡಿ ಒಂದು ವಾರದೊಳಗಾಗಿ ಸೇವೆಗೆ ಹಾಜರಾಗಲು ಈ ಮೂಲಕ ಸೂಚಿಸಿದೆ. ಈ ರಾಜ್ಯ ಪತ್ರ ಪ್ರಕಟಣೆ ಹೊರಡಿಸಿದ 8 ದಿವಸದೊಳಗಾಗಿ ಸೇವೆಗೆ ಹಾಜರಾಗದಿದ್ದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 108ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗುವುದೆಂದು ಈ ರಾಜ್ಯಪತ್ರ ಪ್ರಕಟಣೆ ಮುಖಾಂತರ ತಿಳಿಸಲಾಗಿದೆ.

ಉಪನಿರ್ದೇಶಕರು (ಆಡಳಿತ),
ಸಾರ್ವಜನಿಕ ಶಿಕ್ಷಣ ಇಲಾಖೆ, ಬೀದರ್.

ಪಿ.ಆರ್.1448

## ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ, ಕಾರ್ಮಿಕ ಅಧಿಕಾರಿ ಉಪ ವಿಭಾಗ-1, ವಿಜಾಪುರ ಜಿಲ್ಲೆ, ವಿಜಾಪುರ

### ಪ್ರಕರಣ

### ಸಂಖ್ಯೆ:ಡಬ್ಲ್ಯೂಸಿಎ:ಎಸ್‌ಆರ್-90:2005, ದಿನಾಂಕ:3ನೇ ಸೆಪ್ಟೆಂಬರ್, 2005

**ಅರ್ಜಿದಾರರು:**

1. ಲಕ್ಷ್ಮೀಬಾಯಿ ಗಂಡ: ಬಲಭೀಮ ಕಾಳೆ, ಸಾ:ಧೂಳಖೇಡ ತಾ: ಇಂಡಿ, ಜಿಲ್ಲೆ: ವಿಜಾಪುರ. ಹಾಗೂ ಇತರರು.

**ಪ್ರತಿವಾದಿಗಳು:**

1. ಮಿ. ಕಟ್ಟಿಮನಿ ವಿ.ವಿ. ಪೋ: ಮಲಕವಾಟೆ ತಾ: ಸೌತ್, ಸೋಲಾಪುರ, ಜಿ: ಸೋಲಾಪುರ.
2. ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ. ವಿಜಾಪುರ.

### ಪ್ರಕಟಣೆ

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಬಲಭೀಮ ತಂದೆ ಆನಂದ ಕಾಳೆ, ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ, ದಿನಾಂಕ: 06.06.2005 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಯಾಗಲಿ ಅಥವಾ ಅರ್ಜಿಯಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಯನ್ನು ಸ್ವೀಕರಿಸುವುದಿಲ್ಲ.

**ಎಂ.ಡಿ. ಇಂಡಿ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪ ವಿಭಾಗ-1, ವಿಜಾಪುರ.

ಪಿ.ಆರ್.1449

## ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ, ಕಾರ್ಮಿಕ ಅಧಿಕಾರಿ ಉಪ ವಿಭಾಗ-1, ವಿಜಾಪುರ ಜಿಲ್ಲೆ, ವಿಜಾಪುರ

### ಪ್ರಕರಣ

### ಸಂಖ್ಯೆ:ಡಬ್ಲ್ಯೂಸಿಎ:ಎಸ್‌ಆರ್-106:2005, ದಿನಾಂಕ:4ನೇ ಅಕ್ಟೋಬರ್, 2005

**ಅರ್ಜಿದಾರರು:**

1. ನೂರೆಂಗಲ್ ನಫೀಸಾ ಗಂಡ: ನಂಬಾನ ಕುನ್ನನ ಅಬ್ದುಲ್ ಸಲಾಮ, ಸಾ: ಪಿ.ಕೆ. ನಗರ, ಮುದ್ದೇಬಿಹಾಳ್, ಹಾಗೂ ಇತರರು.

**ಪ್ರತಿವಾದಿಗಳು:**

1. ಮಿ.ಕೆ. ಸುಧಾಕರ ರೆಡ್ಡಿ ಸಾ: ಪ್ಲಾಟ ನಂ.53, ಶ್ರೀನಗರ ಕಾಲನಿ, ಹೈದ್ರಾಬಾದ್, (ಆಂಧ್ರಪ್ರದೇಶ).
2. ದಿ ಓರಿಯಂಟಲ್ ಇನ್ಶೂರೆನ್ಸ್ ಕಂ. ವಿಜಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ನಂಬಾನ ಕುನ್ನನ ಅಬ್ದುಲ್ ಸಲಾಮ, ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ, ದಿನಾಂಕ:18.11.2002 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಯಾಗಲಿ ಅಥವಾ ಅರ್ಜಿಯಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಯನ್ನು ಸ್ವೀಕರಿಸುವುದಿಲ್ಲ.

**ಎಂ.ಡಿ. ಇಂಡಿ**

ಪಿ.ಆರ್.1450

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪ ವಿಭಾಗ-1, ವಿಜಾಪುರ.

## ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ, ಕಾರ್ಮಿಕ ಅಧಿಕಾರಿ ಉಪ ವಿಭಾಗ-1, ವಿಜಾಪುರ ಜಿಲ್ಲೆ, ವಿಜಾಪುರ

**ಪ್ರಕರಣ**

**ಸಂಖ್ಯೆ:ಡಬ್ಲ್ಯೂಸಿಎ:ಎಸ್‌ಆರ್-108:2005, ದಿನಾಂಕ:4ನೇ ಅಕ್ಟೋಬರ್, 2005**

| ಅರ್ಜಿದಾರರು: | ಪ್ರತಿವಾದಿಗಳು: |
|---|---|
| 1. ಶ್ರೀಮತಿ ಮೀನಾ ಗಂಡ: ಮಾರುತಿ ಲೋಖಂಡೆ ಸಾ: ಧೂಳಖೇಡ ತಾ: ಇಂಡಿ, ಜಿಲ್ಲೆ: ವಿಜಾಪುರ. | 1. ಶ್ರೀ ಶೇಖ್ ಫೈಯಾಜ್ ತಂದೆ: ಶೇಖ್ ಹೈದರ್, ಸಾ: ಕುಂಬಾರ ಚಿಂಚೋಳಿ, ತಾ:ಹುಮ್ನಾಬಾದ್ ಜಿ: ಬೀದರ್. |
| | 2. ದಿ ರಾಯಲ್ ಸುಂದರಂ ಅಲಾಯನ್ಸ್ ಇನ್ಸೂರೆನ್ಸ್ ಕಂ.ಲಿ., 46 ವೈಟ್ಸ್ ರೋಡ್, ಚೆನ್ನೈ-6000014. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಮಾರುತಿ ಲೋಖಂಡೆ, ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ, ದಿನಾಂಕ:27.12.2004 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಯಾಗಲಿ ಅಥವಾ ಅರ್ಜಿಯಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಯನ್ನು ಸ್ವೀಕರಿಸುವುದಿಲ್ಲ.

**ಎಂ.ಡಿ. ಇಂಡಿ**

ಪಿ.ಆರ್.1451

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪ ವಿಭಾಗ-1, ವಿಜಾಪುರ.

## ಆಯುಕ್ತರು, ಕಾರ್ಮಿಕ ನಷ್ಟ ಪರಿಹಾರ ನ್ಯಾಯಾಲಯ, ಕಾರ್ಮಿಕ ಅಧಿಕಾರಿ ಉಪ ವಿಭಾಗ-1, ವಿಜಾಪುರ ಜಿಲ್ಲೆ, ವಿಜಾಪುರ

**ಪ್ರಕರಣ**

**ಸಂಖ್ಯೆ:ಡಬ್ಲ್ಯೂಸಿಎ:ಎಸ್‌ಆರ್-109:2005, ದಿನಾಂಕ:4ನೇ ಅಕ್ಟೋಬರ್, 2005**

| ಅರ್ಜಿದಾರರು: | ಪ್ರತಿವಾದಿಗಳು: |
|---|---|
| 1. ಶ್ರೀ ಬಾಬುರಾವ ತಂದೆ: ಗೋವಿಂದರಾವ, ಮಲಕಾರೆ ಸಾ: ಧೂಳಖೇಡ, ಜಿ: ವಿಜಾಪುರ. ಹಾಗೂ ಇತರರು. | 1. ಶ್ರೀ ಮಹಾದೇವ ತಂದೆ: ಕೆರಬೊ ಕೋಲ್ಲೆ, ಸಾ: ಬರೂರ ತಾ: ಸೌತ್ ಸೋಲಾಪುರ. |
| | 2. ದಿ ಎಕ್ಸಿಕ್ಯೂಟಿವ್ ಇಂಜಿನಿಯರ್, ಎಂ.ಎಸ್.ಇ.ಬಿ. ಸೌತ್ ಸೋಲಾಪುರ, ಜಿ: ಸೋಲಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಸಿದ್ರಾಮ ಉರ್ಫ್ ಗೋವಿಂದ ಮಲಕಾರೆ, ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ, ದಿನಾಂಕ:06.05.2005 ರಂದು ಮರಣ ಹೊಂದಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೇ ತಾವು ಮೃತರ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆಯಾಗಲಿ ಅಥವಾ ಅರ್ಜಿಯಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮು ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಯನ್ನು ಸ್ವೀಕರಿಸುವುದಿಲ್ಲ.

**ಎಂ.ಡಿ. ಇಂಡಿ**

ಪಿ.ಆರ್.1452

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪ ವಿಭಾಗ-1, ವಿಜಾಪುರ.